newly formed Districts of Ramanagara, Chikkaballapura and Yadgir, in their respective jurisdiction, as Human Rights Courts to try the offences arising out of violation of human rights.

By Order and in the Name of the Governor of Karnataka

**S. SIDDALINGESH,**

Secretary to Government,

Department of Law, Justice and Human Rights.

**P.R : 966**

## ಶಿಕ್ಷಣ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಇಡಿ 18 ಇಎಸ್‌ಡಬ್ಲ್ಯೂ 2010, ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್, 2011.**

ದಿನಾಂಕ: 24–06–2011 ರ ಅಧಿಸೂಚನೆ ಸಂಖ್ಯೆ : ಇಡಿ 18 ಇಎಸ್‌ಡಬ್ಲ್ಯೂ 2010ರ ನಾಲ್ಕನೆಯ ಸಾಲಿನಲ್ಲಿ "ದಿನಾಂಕ : 19–04–2006 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ" ಎಂದು ನಮೂದಾಗಿರುವುದರೊಂದಿಗೆ "1978 ರ ಕರ್ನಾಟಕ ಸಿವಿಲ್ ಸೇವೆಗಳು (ಬಡ್ತಿ, ವೇತನ ಮತ್ತು ಪಿಂಚಣಿಗಳ ಕ್ರಮಬದ್ಧತೆ) ನಿಯಮಾವಳಿಗಳ ನಿಯಮ 2(1)(ಎ) ರ ಪ್ರಕಾರ" ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಪಟಗಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ),

ಶಿಕ್ಷಣ ಇಲಾಖೆ.

**ಪಿ.ಆರ್. 925**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 802 ವೆಚ್ಚ–12/11 ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್, 2011**

ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ CCTV ಅಳವಡಿಸುವ ಕಾರ್ಯವನ್ನು M/s. ECIL ಸಂಸ್ಥೆಗೆ ನೇರವಾಗಿ ವಹಿಸಲು ಮತ್ತು ಈಗಾಗಲೇ ಕರೆದಿರುವ ಟೆಂಡರ್‌ನ್ನು ರದ್ದುಗೊಳಿಸುವ ಷರತ್ತಿಗೊಳಪಟ್ಟು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ –1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಒಳಾಡಳಿತ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಉಪಕರಣಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಒಳಾಡಳಿತ ಇಲಾಖೆಯು ದೃಢಪಡಿಸಿಕೊಳ್ಳಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಬಿ. ವಿಜಯ ಕುಮಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ.(ಸಂಗ್ರಹಣಾ ಕೋಶ)

**ಪಿ.ಆರ್. 926**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 799 ವೆಚ್ಚ–12/11 ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್, 2011**

ದಿನಾಂಕ 16–17, ಸೆಪ್ಟೆಂಬರ್ 2011 ರಂದು RFD Workshopನ್ನು ಹೋಟೆಲ್ ಕ್ಯಾಪಿಟಲ್‌ನಲ್ಲಿ ನಡೆಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ –1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಆರ್ಥಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಬಿ. ವಿಜಯ ಕುಮಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ.(ಸಂಗ್ರಹಣಾ ಕೋಶ)

**ಪಿ.ಆರ್. 927**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಹೆಚ್‌ಡಿ 412 ಎಸ್‌ಎಸ್‌ಟಿ 2011, ಬೆಂಗಳೂರು, ದಿನಾಂಕ: 21ನೇ ಸೆಪ್ಟೆಂಬರ್, 2011.**

64–ಕೊಪ್ಪಳ ವಿಧಾನ ಸಭಾ ಉಪ ಚುನಾವಣೆ–2011ರ ಪ್ರಯುಕ್ತ ಕೊಪ್ಪಳ ಜಿಲ್ಲೆಯಲ್ಲಿ ನಡೆಯಲಿರುವ ಮತದಾನದ ಸಮಯದಲ್ಲಿ ಮಾದರಿ ನೀತಿ ಸಂಹಿತೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ಸಲುವಾಗಿ ಹಾಗೂ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ದಿನಾಂಕ: 25–09–2011 ಮತ್ತು 26–09–2011 ರಂದು ಭಾರತೀಯ ದಂಡ ಪ್ರಕ್ರಿಯಾ ಸಂಹಿತೆ 1973 (ಕೇಂದ್ರ ಕಾಯಿದೆ ಸಂಖ್ಯೆ : 2–1974)ರ ಕಲಂ 21ರಲ್ಲಿನ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅಧಿಕಾರಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಿಗೆ ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳನ್ನಾಗಿ ನೇಮಿಸಿದೆ.

| ಕ್ರ.ಸಂ. | ವಿಶೇಷ ಕಾರ್ಯನಿರ್ವಾಹಕ ದಂಡಾಧಿಕಾರಿಗಳ ಹೆಸರು ಮತ್ತು ಇಲಾಖೆ | ಅಧಿಕಾರಿಗಳು ಕಾರ್ಯನಿರ್ವಹಿಸುವ ಕ್ಷೇತ್ರ ವ್ಯಾಪ್ತಿ |
|---|---|---|
| (1) | (2) | (3) |
| 1. | ಶ್ರೀ ಪರಶುರಾಮ ಭಜಂತ್ರಿ,<br>ಕಾರ್ಯನಿರ್ವಾಹಕ ಅಭಿಯಂತರರು,<br>ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಕೊಪ್ಪಳ. | ಅಳವಂಡಿ ಹೋಬಳಿ |
| 2. | ಶ್ರೀ ಲಕ್ಷ್ಕರ ನಾಯ್ಕ,<br>ಕಾರ್ಯನಿರ್ವಾಹಕ ಅಭಿಯಂತರರು,<br>ಲೋಕೋಪಯೋಗಿ ಇಲಾಖೆ, ಕೊಪ್ಪಳ. | ಕೊಪ್ಪಳ ಗ್ರಾಮೀಣ |
| 3. | ಶ್ರೀ ಮಾರುತಿ ಗೋಖಲೆ,<br>ಕಾರ್ಯನಿರ್ವಾಹಕ ಅಭಿಯಂತರರು,<br>ಸಣ್ಣ ನೀರಾವರಿ ಇಲಾಖೆ ವಿಭಾಗ, ಕುಷ್ಟಗಿ. | ಕೊಪ್ಪಳ ನಗರ |
| 4. | ಶ್ರೀ ವಿ.ಆರ್. ಸತಾರ್‌ಕರ್,<br>ಜಿಲ್ಲಾ ವಿಮಾ ಅಧಿಕಾರಿ, (ಕೆ.ಜಿ.ಐ.ಡಿ), ಕೊಪ್ಪಳ | ಮುನಿರಾಬಾದ್<br>(ಹಿಟ್ನಾಳ ಹೋಬಳಿ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

**ಪಿ.ಆರ್. 928**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಐಟಿಡಿ 62 ಎಡಿಎಂ 2011, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011.**

ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತದ ಸಂಘ ನಿಯಮಾವಳಿ (Article of Association) ಗಳ ನಿಯಮ 18ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ವರ್ಗಾವಣೆಗೊಂಡಿರುವ ಶ್ರೀ ವಿಪುಲ್ ಬನ್‌ಸಾಲ್ ಐ.ಎ.ಎಸ್ ಉಪ ಕಾರ್ಯದರ್ಶಿ–3 ಆರ್ಥಿಕ ಇಲಾಖೆ ಇವರು ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮದ ನಿರ್ದೇಶಕರಾಗಿದ್ದು, ಇವರ ಸ್ಥಾನದಲ್ಲಿ ಶ್ರೀ ಡಿ. ರಣದೀಪ್ ಐ.ಎ.ಎಸ್ ಉಪ ಕಾರ್ಯದರ್ಶಿ–3 ಆರ್ಥಿಕ ಇಲಾಖೆ ಇವರನ್ನು ಕಿಯೋನಿಕ್ಸ್ ಸಂಸ್ಥೆಯ ನಿರ್ದೇಶಕ ಮಂಡಳಿಯ ನಿರ್ದೇಶಕರನ್ನಾಗಿ ನಾಮನಿರ್ದೇಶನ ಮಾಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ.ರಾಮಕೃಷ್ಣಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಪಿ.ಆರ್. 929**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 31 ಎಸ್‌ಎಂಆರ್ 2011, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್, 2011.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ರ ನಿಯಮ 3 ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–I ರ ಐಟಂ 281 ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ :–

**(282) ಡಾ: ಅಗರ್‌ವಾಲ್ಸ್ ಐ ಹಾಸ್ಪಿಟಲ್, #11, 7ನೇ ಅಡ್ಡ ರಸ್ತೆ, ಕಾವೇರಿಯಪ್ಪ ಇಂಡಸ್ಟ್ರಿಯಲ್ ಏರಿಯಾ, ಎನ್.ಎಸ್.ಪಾಳ್ಯ, ಬನ್ನೇರುಘಟ್ಟ ರಸ್ತೆ, ಬೆಂಗಳೂರು– 560 076.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2).

## PERSONNEL AND ADMINISTRATIVE REFORMS SECRETARIAT

### NOTIFICATION

**NO. DPAR 31 SMR 2011, Bangalore, Dated: 28th September, 2011**

In exercise of the powers conferred by clause (ff) of rule 3 of the Karnataka Government Servants` (Medical Attendance) rules 1963, the Government of Karnataka hereby adds the following item after item 281 of Schedule I to the said rules, namely:-

**(282) Dr.Agarwal`s Eye Hospital, #11, 7th Cross, Kaveriappa Industrial Area, N.S.Palya, Bannerghatta Road, Bangalore-560 076.**

By Order and in the Name of the Governor of Karnataka

**P. MARKANDEYA,**

Under Secretary to Government ,

Department of Personnel and Administrative Reforms

(Service Rules-2).

**P.R : 932**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 87 ಪೊಪೆಸೆ 2011, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2011.**

ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತದ ಹಾಲಿ ನಿರ್ದೇಶಕರುಗಳನ್ನು ಪುನರ್ ರಚಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ | ನಾಮ ನಿರ್ದೇಶನ |
|---|---|---|
| 1. | ಶ್ರೀ ಕುಚ್ಚಣ್ಣ ಶ್ರೀನಿವಾಸನ್, ಐ.ಪಿ.ಎಸ್. ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು. | ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು |
| 2. | ಶ್ರೀ ಅನಿಲ್ ಕುಮಾರ್ ಜಾ:, ಐ.ಎ.ಎಸ್, ಸರ್ಕಾರದ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ (ವೆಚ್ಚ), ಬೆಂಗಳೂರು. | ನಿರ್ದೇಶಕರು |
| 3. | Professor of Civil/Structural Engineering, Indian Institute of Management, Bangalore nominated by its Director. | ನಿರ್ದೇಶಕರು |

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ | ನಾಮ ನಿರ್ದೇಶನ |
|---|---|---|
| 4. | ಶ್ರೀ ಕೆ.ಬಿ. ದೇವರಾಜ,<br>ಸರ್ಕಾರದ ಕಾರ್ಯದರ್ಶಿಗಳು,<br>ಲೋಕೋಪಯೋಗಿ ಇಲಾಖೆ, ಬೆಂಗಳೂರು. | ನಿರ್ದೇಶಕರು |
| 5 | ಶ್ರೀ ಅಷಿತ್ ಮೋಹನ್ ಪ್ರಸಾದ್, ಐ.ಪಿ.ಎಸ್.<br>ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್,<br>(Communication Logistics and Modernization)<br>Bangalore. | ನಿರ್ದೇಶಕರು |
| 6 | ಶ್ರೀ ಎಂ. ಬಾಲಕೃಷ್ಣ,<br>ರೀಜನಲ್ ಛೀಫ್,<br>ಹುಡ್ಕೋ, ಬೆಂಗಳೂರು | ನಿರ್ದೇಶಕರು |
| 7 | Professor, Specialised in Project Management, Indian Institute of Management, Bangalore nominated by its Director. | ನಿರ್ದೇಶಕರು |
| 8 | ಶ್ರೀ ರಾಘವೇಂದ್ರ ಹೆಚ್. ಔರಾದ್‌ಕರ್, ಐ.ಪಿ.ಎಸ್.<br>ಸರ್ಕಾರದ ಕಾರ್ಯದರ್ಶಿಗಳು (ಪಿ.ಸಿ.ಎ.ಎಸ್),<br>ಒಳಾಡಳಿತ ಇಲಾಖೆ, ಬೆಂಗಳೂರು. | ನಿರ್ದೇಶಕರು |
| 9. | ಶ್ರೀ ಎಂ.ಎನ್.ರೆಡ್ಡಿ, ಐ.ಪಿ.ಎಸ್.<br>ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್,<br>ಕಾರ್ಯಕಾರಿ ನಿರ್ದೇಶಕರು,<br>ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು | ನಿರ್ದೇಶಕರು ಹಾಗೂ ಸಂಚಾಲಕರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ನಿಂಗಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ),

**ಪಿ.ಆರ್. 933**

## ಕಂದಾಯ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕಂಇ 262 ಎಲ್‌ಆರ್‌ಎ 2009, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್, 2011.**

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 48ರ ಉಪ ಕಲಂ (1) ರಿಂದ (3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಭೂ ನ್ಯಾಯ ಮಂಡಳಿಗೆ ಈ ಹಿಂದೆ ಮಾಡಿದ್ದ ಎಲ್ಲಾ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಅವರ ಬದಲಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಸದರಿ ಭೂ ನ್ಯಾಯ ಮಂಡಳಿಗಳನ್ನು ಪುನರ್ ರಚಿಸಿ ಆದೇಶ ಹೊರಡಿಸಿದೆ.

| ಕ್ರಮ ಸಂಖ್ಯೆ | ಭೂ ನ್ಯಾಯ ಮಂಡಳಿಯ ಹೆಸರು | ಅಧಿಕಾರೇತರ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|
| 1. | ಹುನಗುಂದ ತಾಲ್ಲೂಕು,<br>ಬಾಗಲಕೋಟೆ ಜಿಲ್ಲೆ | 1. ಶ್ರೀ ಸುಭಾಸ ಸಿದ್ದಪ್ಪ ಮುಕ್ಕಣ್ಣವರ,<br>ಸಾ: ಹುನಗುಂದ<br>2. ಶ್ರೀ ಬಾಳಾಸಾಹೇಬ ಮಲ್ಲಿಕಾರ್ಜುನ ನಾಡಗೌಡ್ರ<br>ಸಾ:ಕೆಲೂರ. |

| ಕ್ರಮ ಸಂಖ್ಯೆ | ಭೂ ನ್ಯಾಯ ಮಂಡಳಿಯ ಹೆಸರು | ಅಧಿಕಾರೇತರ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|
| | | 3. ಶ್ರೀ ಶಿವರುದ್ರಪ್ಪ ಮಹಾಂತಪ್ಪ, ಗೊಂಗಡಶೆಟ್ಟಿ ಸಾ:ಇಲಕಲ್,<br>4. ಸೋಮಶೇಖರ ನಿಂಗಪ್ಪ, **(ಪರಿಶಿಷ್ಟ ಜಾತಿ)** ಬಂಡಿ ಸಾ: ನಂದನೂರ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನಾರಾಯಣಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

**ಪಿ.ಆರ್. 935**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 47 ಸಿಎನ್ಎಸ್ 2011 ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 157 ಸಿಎನ್ಎಸ್ 2008 ದಿನಾಂಕ: 14–10–2009 ರಲ್ಲಿ ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನ ಕರ್ನಾಟಕ ಕೋ–ಆಫ್ ಉಲನ್ ಟೆಕ್ಸ್‌ಟೈಲ್ಸ್ ಮಿಲ್ ನಿಯಮಿತ, ಕಮದೋಡ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಕರಿಯಪ್ಪ ಮಲ್ಲೇಶಪ್ಪ ಬೀರಾಳ, ಸಾ: ಹಿರೇಬಿದರಿ ಇವರ ನಾಮನಿರ್ದೇಶನವನ್ನು ಮಾರ್ಪಡಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1) ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಶ್ರೀ ಕರಿಯಪ್ಪ ಮಲ್ಲೇಶಪ್ಪ ಬೀರಾಳ, ಸಾ: ಹಿರೇಬಿದರಿ ಇವರನ್ನು ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನ ಕರ್ನಾಟಕ ಕೋ–ಆಫ್ ಉಲನ್** ಟೆಕ್ಸ್‌ಟೈಲ್ಸ್ ಮಿಲ್ ನಿಯಮಿತ, ಕಮದೋಡ ಇದರ ಆಡಳಿತ ಮಂಡಳಿಗೆ ಪುನಃ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 936**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 195 ಮುನೋಮು 2011 ಬೆಂಗಳೂರು, ದಿನಾಂಕ: 19ನೇ ಸೆಪ್ಟೆಂಬರ್, 2011**

ಕರ್ನಾಟಕ ಮುದ್ರಾಂಕ ಕಾಯ್ದೆ, 1957ರ (1957ರ ಕರ್ನಾಟಕ ಕಾಯ್ದೆ–34) ಅನುಚ್ಛೇದ 37 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆನರಾ ಬ್ಯಾಂಕ್, ಬೆಂಗಳೂರು ಇವರು ವಿತರಿಸಲಿರುವ ಒಟ್ಟು ರೂ. 1,993,20,00,000/ಗಳ ಮೊತ್ತದ – **"ಪ್ರೈವೇಟ್ ಪ್ಲೇಸ್‌ಮೆಂಟ್"** ಈಕ್ವಿಟಿ ಷೇರುಗಳಿಗೆ ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಮುದ್ರಾಂಕ ಶುಲ್ಕ ಅನುಸೂಚಿಯ ಅನುಚ್ಛೇದ 16 ರಂತೆ ಒಟ್ಟು ರೂ. 1,99,32,000/– (ರೂಪಾಯಿ ಒಂದು ಕೋಟಿ ತೊಂಬತ್ತೊಂಬತ್ತು ಲಕ್ಷ ಮೂವತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ಮುದ್ರಾಂಕ ಶುಲ್ಕವನ್ನು ದಿನಾಂಕ: 29–03–2011 ರಂದು ಸಂದಾಯಿಸಿರುತ್ತಾರೆಂದು ಕರ್ನಾಟಕ ಸರ್ಕಾರವು ಪ್ರಕಟಿಸುತ್ತದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 195 ಮುನೋಮು 2011 ದಿನಾಂಕ: 19–09–2011ರ ಪ್ರಕಾರ ಸಂಚಿತ ಮುದ್ರಾಂಕ ಶುಲ್ಕವನ್ನು ಮೊದಲ ಬಾರಿಗೆ ಸಂದಾಯಿಸಲಾಗಿದೆ ಎಂಬ ಪದಗಳನ್ನು ಷೇರು ಪತ್ರಗಳ ಮೇಲೆ ಮುದ್ರಿಸಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ಮುದ್ರಾಂಕ ನಿಯಮಾವಳಿಗಳ ನಿಯಮ 11–ಎ(4)ರ ಪ್ರಕಾರ ಸರ್ಕಾರದ ಸಂಬಂಧಪಟ್ಟ ಅಧಿಕಾರಿಗಳು ಷೇರುಗಳ ಖರೀದಿಗೆ ಸಂಬಂಧಿಸಿದಂತೆ ನಿರ್ವಹಿಸಲಾದ ರಿಜಿಸ್ಟರ್ ಪುಸ್ತಕ, ದಾಖಲೆಗಳನ್ನು ಪರಿಶೀಲಿಸಲು ಮತ್ತು ತಪಾಸಣೆ ನಡೆಸಲು ಸದರಿ ಸಂಸ್ಥೆಯು ಅವಕಾಶ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಕೆ. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ಪಿ.ಆರ್. 938**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 857 ವೆಚ್ಚ–12/11 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್, 2011**

ವಾಣಿಜ್ಯ ತೆರಿಗೆಗಳ ಇಲಾಖೆಯ ಕಂಪ್ಯೂಟರ್ ವ್ಯವಸ್ಥೆಯ ಜಾಲತಾಣಗಳ ಕಾರ್ಯಕ್ಷಮತೆ ಮತ್ತು ಕಾರ್ಯಒತ್ತಡದ ಪರೀಕ್ಷೆಯನ್ನು (Performance and Workload Testing) ಮೆ: ವಿಪ್ರೋ ಲಿಮಿಟೆಡ್ ರವರಿಗೆ ರೂ 10,80,940/– (ತೆರಿಗೆಗಳು ಸೇರಿದಂತೆ) ಗಳ ವೆಚ್ಚದಲ್ಲಿ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ –1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ವಾಣಿಜ್ಯ ತೆರಿಗೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಗಳನ್ನು ಸ್ಪರ್ಧಾತ್ಮಕ ದರದಲ್ಲಿ ಸಂಗ್ರಹಿಸುವುದನ್ನು ವಾಣಿಜ್ಯ ತೆರಿಗೆ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಬಿ. ವಿಜಯ ಕುಮಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ.(ಸಂಗ್ರಹಣಾ ಕೋಶ)

**ಪಿ.ಆರ್. 967**

## PERSONNEL AND ADMINISTRATIVE REFORMS SECRETARIAT

### NOTIFICATION

**NO. DPAR 47 SDE 2011, Bangalore, Dated: 12th October, 2011**

In exercise of the powers conferred by the proviso to sub-rule (1) of rule 7 of the Karnataka Civil Services (Classification, Control and Appeal) Rules, 1957, the Government of Karnataka hereby specifies that the Chief Secretary to Government shall be the Appointing Authority in respect of first appointments to Group-B posts of Section Officers of the Karnataka Government Secretariat.

By Order and in the Name of the Governor of Karnataka

**H.K.LAKSHMINARAYANA RAO,**

Under Secretary to Government I/c,

Department of Personnel and Administrative Reforms

(Service Rules-2).

**P.R : 968**

## URBAN DEVELOPMENT SECRETARIAT

### NOTIFICATION

**NO. UDD 52 BMS 2009 (P-2), Bangalore, Dated: 29th October, 2011**

Whereas, the draft of the Karnataka Municipalities (Recruitment of Officers and Employees) (Amendment) Rules which the Government of Karnataka proposes to make in exercise of the powers conferred by clause(g) of sub-section(2) of Section 323 of the Karnataka Municipalities Act, 1964 (Karnataka Act No.22 of 1964) is hereby published as required by sub-section(1) of Section 323 of the Act for the information of all the persons likely to be affected thereby and notice is hereby given that the said draft will be taken into consideration after fifteen days from the date of its publication in the official gazette;

And whereas, the said Gazette was made available to the public on 25-8-2011.

And whereas, the objections and suggestions received in respect of the said draft has been considered by the State Government;

Now, therefore, in exercise of the powers conferred by Section 323 of the Karnataka Municipalities Act, 1964 (Karnataka Act 22 of 1964) the Government of Karnataka hereby makes the following rules, namely:-

1. **Title, Commencement and Application.-** (1) These rules may be called the Karnataka Municipalities (Recruitment of Officers and Employees) (Amendment) Rules, 2011.

   (2) They shall come into force from the date of their publication in the official Gazette.

2. **Amendment of Schedule II.-** In schedule II of Karnataka Municipalities (Recruitment of Officers and Employees) Rules, 2011, in serial number 33 in column (5) for the entries "(1) and (2)" the entry "Must have knowledge of spoken Kannada" shall be substituted.

By Order and in the Name of the Governor of Karnataka

**C.R. RAVINDRA,**

Under Secretary to Government,

**P.R : 1003**

Urban Development Department .

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 169 ಮುನೋಮು 2011, ಬೆಂಗಳೂರು, ದಿನಾಂಕ : 09ನೇ ನವೆಂಬರ್, 2011.**

Advanced Numerical Research and Analysis Group (ANURAG), ರಕ್ಷಣಾ ಮಂತ್ರಾಲಯ, ಭಾರತ ಸರ್ಕಾರ, ಹೈದ್ರಾಬಾದ್ ಸಂಸ್ಥೆಯು ಕೇಂದ್ರ ಸರ್ಕಾರದ ರಕ್ಷಣಾ ಮಂತ್ರಾಲಯದ ಪ್ರಯೋಗಾಲಯವಾಗಿದ್ದು, ಸದರಿ ಸಂಸ್ಥೆಯು ಮೆ: ಐಟಿಐ ಲಿ., ಬೆಂಗಳೂರು ಇವರಿಂದ 23.503 ಎಕರೆ ಜಮೀನು ಮತ್ತು ಕಟ್ಟಡವನ್ನು ಖರೀದಿಸಲು ಉದ್ದೇಶಿಸಿ ಬರೆಯಿಸಿಕೊಳ್ಳುತ್ತಿರುವ ಕ್ರಯಪತ್ರ ನೋಂದಾವಣೆಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ ಕರ್ನಾಟಕ ಮುದ್ರಾಂಕ ಕಾಯ್ದೆ, 1957ರ ಕಲಂ9(1) (ಎ)ರ ಅನ್ವಯ ಶೇ.50 ರಷ್ಟು ರಿಯಾಯಿತಿಯನ್ನು ಹಾಗೂ ನೋಂದಣಿ ಕಾಯ್ದೆ 1908ರ ಕಲಂ 78ರ ಪ್ರಕಾರ ನೋಂದಣಿ ವೆಚ್ಚದಲ್ಲಿ ಪೂರ್ಣ ವಿನಾಯಿತಿಯನ್ನು ನೀಡಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1027**

ಕಂದಾಯ ಇಲಾಖೆ.( ನೋಂದಣಿ ಮತ್ತು ಮುದ್ರಾಂಕ).

**ಅರಣ್ಯ ಪರಿಸರ ಮತ್ತು ಜೀವಿಪರಿಸ್ಥಿತಿ ಶಾಸ್ತ್ರ ಸಚಿವಾಲಯ**

**ಸಂಖ್ಯೆ : ಅಪಜೀ 137 ಎಫ್‌ಎಎಫ್ 2007, ಬೆಂಗಳೂರು, ದಿನಾಂಕ: 24-10-2011.**

**ಅಧಿಸೂಚನೆ**

ಕರ್ನಾಟಕ ರಾಜ್ಯ ಅರಣ್ಯ ಕಾಯ್ದೆ 1963 (1964 ನೇ ಕರ್ನಾಟಕ ಕಾಯ್ದೆ ಕಲಂ ರ) ರ ಕಲಂ 17 ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅಧಿಸೂಚನೆ ಸಂಖ್ಯೆ: ಎಹೆಚ್‌ಎಫ್‌ಎಫ್ 122 ಎಫ್‌ಎಎಫ್ 91 ದಿನಾಂಕ: 22-06-1991 ರ ಪ್ರಕಾರ ಅಧಿಸೂಚನೆಯ ಕೊನೆಯ ಭಾಗದಲ್ಲಿ ನಮೂದಿಸಿರುವ ಹಕ್ಕುಗಳ ಉಪಯೋಗಕ್ಕೆ ಒಳಪಟ್ಟು ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ರಾಯಚೂರು ಜಿಲ್ಲೆ, ರಾಯಚೂರು ತಾಲ್ಲೂಕು, ಗಿಲ್ಲೆಸೂಗೂರು ಹೋಬಳಿ, ಗಟ್ಟಿಬಿಚಾಲ ಗ್ರಾಮದ ಜಮೀನುಗಳನ್ನು ಈ ಅಧಿಸೂಚನೆಯು ಗೆಜೆಟ್‌ನಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ "ಮೀಸಲು ಅರಣ್ಯ"ವೆಂದು ಕರ್ನಾಟಕ ಸರ್ಕಾರವು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | | | |
|---|---|---|---|
| 1. | ಜಿಲ್ಲೆಯ ಹೆಸರು | : | ರಾಯಚೂರು |
| 2. | ತಾಲ್ಲೂಕಿನ ಹೆಸರು | : | ರಾಯಚೂರು |
| 3. | ಹೋಬಳಿಯ ಹೆಸರು | : | ಗಿಲ್ಲೆಸೂಗೂರು |
| 4. | ಗ್ರಾಮದ ಹೆಸರು | : | ಗಟ್ಟಿಬಿಚಾಲ |
| 5. | ಕ್ಷೇತ್ರದ ಸರ್ವೆ ನಂಬರ್ | : | 20, 33 ಮತ್ತು 238 |
| 6. | ವಿಸ್ತೀರ್ಣ (ಹೆಕ್ಟೇರುಗಳಲ್ಲಿ) | : | 66.94, 2.98 ಮತ್ತು 28.75 (ಒಟ್ಟು 98.67) |
| 7. | ಕ್ಷೇತ್ರದ ಹೆಸರು | : | ಗಟ್ಟಿಬಿಚಾಲ ಕ್ಷೇತ್ರ |

**ಸೀಮಾ ವಿವರಣೆ**

**ಉತ್ತರ:–** ಸೀಮಾರೇಖೆಯು ಗಟ್ಟಿಬಿಚಾಲಿ ಗ್ರಾಮದ ಸ.ನಂ.20, 33 ಮತ್ತು 238 ಸದರಿ ಗಟ್ಟಿಬಿಚಾಲಿ ಕ್ಷೇತ್ರದ ಪಶ್ಚಿಮ ದಿಕ್ಕಿನಲ್ಲಿ ಸ.ನಂ.203, ಅಡವಿದಾನಪುರ ಗಡಿ ಮತ್ತು ಈರಾಪುರ ಗಡಿಗಳು ಸೇರುವ ಸ್ಥಳದಲ್ಲಿ 1ನೇ ಕಲ್ಲಿನಿಂದ 79.30 ಡಿಗ್ರಿ ಕೋನದೊಂದಿಗೆ ಆರಂಭವಾಗಿ ಈರಾಪುರ ಗ್ರಾಮದ ಗಡಿಗುಂಟ ಸಾಗುತ್ತಾ ಸ.ನಂ. 34, 36, 39, 40, 41, 51 ಮತ್ತು 52 ಗಳನ್ನು ಹೊರತುಪಡಿಸಿ ಇವುಗಳ ದಕ್ಷಿಣದ ಗಡಿಗುಂಟ ಪೂರ್ವಾಭಿಮುಖವಾಗಿ ಚಲಿಸುತ್ತಾ ಕ್ಷೇತ್ರದ ಈಶಾನ್ಯ ದಿಕ್ಕಿನ ಮೂಲೆಯಲ್ಲಿ 41ನೇ ಕಲ್ಲನ್ನು ಸೇರುತ್ತದೆ. ಉತ್ತರದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸಿರುತ್ತದೆ.

| ಕಲ್ಲಿನಿಂದ | ಕಲ್ಲಿಗೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 1 | 2 | 79–30 | 5.75 |
| 2 | 3 | 103 | 9.75 |
| 3 | 4 | 118 | 5.75 |
| 4 | 5 | 105–30 | 5.00 |
| 5 | 6 | 134 | 4.00 |
| 6 | 7 | 99–30 | 9.25 |
| 7 | 8 | 115 | 7.00 |
| 8 | 9 | 90–30 | 7.25 |
| 9 | 10 | 91–30 | 4.75 |
| 10 | 11 | 115–30 | 4.25 |
| 11 | 12 | 103–30 | 4.50 |
| 12 | 13 | 101–30 | 5.00 |
| 13 | 14 | 110 | 2.50 |
| 14 | 15 | 95–30 | 2.75 |
| 15 | 16 | 117–30 | 4.75 |
| 16 | 17 | 79–30 | 3.25 |
| 17 | 18 | 110–30 | 2.50 |
| 18 | 19 | 117–30 | 3.50 |
| 19 | 20 | 103–30 | 4.00 |
| 20 | 21 | 101 | 3.25 |
| 21 | 22 | 100–30 | 4.00 |
| 22 | 23 | 143 | 2.50 |
| 23 | 24 | 120–30 | 3.50 |
| 24 | 25 | 72–30 | 3.00 |
| 25 | 26 | 72–30 | 4.00 |
| 26 | 27 | 95–30 | 5.75 |
| 27 | 28 | 100–30 | 5.50 |
| 28 | 29 | 209–30 | 4.50 |
| 29 | 30 | 108–30 | 3.50 |
| 30 | 31 | 42 | 2.00 |
| 31 | 32 | 106–30 | 3.75 |

| ಕಲ್ಲಿನಿಂದ | ಕಲ್ಲಿಗೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 32 | 33 | 94–30 | 7.00 |
| 33 | 34 | 108 | 7.00 |
| 34 | 35 | 114–30 | 4.50 |
| 35 | 36 | 67–30 | 6.25 |
| 36 | 37 | 135 | 4.75 |
| 37 | 38 | 59–30 | 5.00 |
| 38 | 39 | 101–30 | 7.50 |
| 39 | 40 | 134–30 | 4.00 |
| 40 | 41 | 112–30 | 7.00 |

**ಪೂರ್ವ:–** ಸೀಮಾರೇಖೆಯು ಸದರಿ ಗಟ್ಟಿಬಿಚಾಲ ಕ್ಷೇತ್ರದ ಈಶಾನ್ಯ ದಿಕ್ಕಿನ ಮೂಲೆಯಲ್ಲಿ ಸ.ನಂ.52, 53 ಮತ್ತು 20ರ ಗಡಿಗಳು ಸೇರುವ ಸ್ಥಳದಲ್ಲಿ 41ನೇ ಕಲ್ಲಿನಿಂದ 121.30 ಡಿಗ್ರಿ ಕೋನದೊಂದಿಗೆ ಆರಂಭವಾಗಿ ಸ.ನಂ.53, 61, 65, 66, 35, 80, 37, 18, 19 ಮತ್ತು 15 ಗಳನ್ನು ಹೊರತುಪಡಿಸಿ ಇವುಗಳ ಪಶ್ಚಿಮದ ಗಡಿಗುಂಟ ದಕ್ಷಿಣಾಭಿಮುಖವಾಗಿ ಚಲಿಸುತ್ತ ಕ್ಷೇತ್ರದ ಆಗ್ನೇಯ ದಿಕ್ಕಿನ ಮೂಲೆಯಲ್ಲಿ 54ನೇ ಕಲ್ಲನ್ನು ಸೇರುತ್ತದೆ. ಪೂರ್ವದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸಿರುತ್ತದೆ.

| ಕಲ್ಲಿನಿಂದ | ಕಲ್ಲಿಗೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 41 | 42 | 121–30 | 7.00 |
| 42 | 43 | 145–30 | 4.00 |
| 43 | 44 | 148–30 | 6.50 |
| 44 | 45 | 121–30 | 3.50 |
| 45 | 46 | 123–30 | 5.50 |
| 46 | 47 | 126 | 4.00 |
| 47 | 48 | 179–30 | 2.75 |
| 48 | 49 | 289 | 8.25 |
| 49 | 50 | 287 | 5.25 |
| 50 | 51 | 273–30 | 7.25 |
| 51 | 52 | 266 | 6.00 |
| 52 | 53 | 185–30 | 8.50 |
| 53 | 54 | 181 | 4.75 |

**ದಕ್ಷಿಣ:–** ಸೀಮಾರೇಖೆಯು ಗಟ್ಟಿಬಿಚಾಲ ಗ್ರಾಮದ ಸ.ನಂ.20, 33, ಮತ್ತು 238 ರ ಸದರಿ ಗಟ್ಟಿಬಿಚಾಲ ಕ್ಷೇತ್ರದ ಆಗ್ನೇಯ ದಿಕ್ಕಿನ ಮೂಲೆಯಲ್ಲಿ ಸ.ನಂ.20, 15 ಮತ್ತು 12 ರ ಗಡಿಗಳು ಕೂಡುವ ಸ್ಥಳದಲ್ಲಿ 54ನೇ ಕಲ್ಲಿನಿಂದ 236 ಡಿಗ್ರಿ ಕೋನದೊಂದಿಗೆ ಆರಂಭವಾಗಿ ಸ.ನಂ.12, 11, 2, 1, 262, 261, 260, 252, 26, 25, 24, 23 22, 21, 32, 239, 235 ಮತ್ತು 236 ಗಳನ್ನು ಹೊರತುಪಡಿಸಿ ಇವುಗಳ ಗಡಿಗುಂಟ ಸಾಗುತ್ತಾ 73ನೇ ಕಲ್ಲಿನಿಂದ 30ನೇ ಕಲ್ಲನ್ನು ಸೇರಿ 30ನೇ ಕಲ್ಲಿನಿಂದ 29ನೇ ಕಲ್ಲನಿಂದ 74ನೇ ಕಲ್ಲಿನ ಮೂಲಕ ಸಾಗುತ್ತ 77ನೇ ಕಲ್ಲಿನಿಂದ 23ನೇ ಕಲ್ಲಿಗೆ ಸೇರಿ 78ನೇ ಕಲ್ಲಿನ ಮೂಲಕ ಸಾಗುತ್ತಾ ಮುಂದೆ 81ನೇ ಕಲ್ಲಿನಿಂದ 20ನೇ ಕಲ್ಲನ್ನು ಸೇರಿ 82ನೇ ಕಲ್ಲಿನ ಮೂಲಕ ಸ.ನಂ.232, 227, 226, 225, 210, 209, 208, 207, 204 ಮತ್ತು 203 ಗಳನ್ನು ಹೊರತುಪಡಿಸಿ ಇವುಗಳ ಉತ್ತರದ ಗಡಿಗುಂಟ ಪಶ್ಚಿಮಕ್ಕೆ ಚಲಿಸುತ್ತಾ 101ನೇ ಕಲ್ಲನ್ನು ದಾಟಿ ಪಶ್ಚಿಮ ದಿಕ್ಕಿನಲ್ಲಿ ಸ.ನಂ.203 ಅಡವಿದಾನಪುರ ಗಡಿ ಮತ್ತು ಈರಾಪುರದ ಗಡಿಗಳು ಕೂಡುವ ಸ್ಥಳದಲ್ಲಿ 1ನೇ ಕಲ್ಲನ್ನು ಸೇರುತ್ತದೆ. ದಕ್ಷಿಣದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸಿರುವುದು.

| ಕಲ್ಲಿನಿಂದ | ಕಲ್ಲಿಗೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 54 | 55 | 236 | 4.50 |
| 55 | 56 | 333 | 5.00 |
| 56 | 57 | 227 | 2.25 |
| 57 | 58 | 322 | 4.50 |
| 58 | 59 | 273 | 7.50 |
| 59 | 60 | 209–30 | 6.50 |
| 60 | 61 | 263–30 | 5.25 |
| 61 | 62 | 278 | 4.75 |
| 62 | 63 | 282 | 4.50 |
| 63 | 64 | 295–30 | 8.00 |
| 64 | 65 | 308–30 | 3.50 |
| 65 | 66 | 348 | 7.00 |
| 66 | 67 | 14 | 5.75 |
| 67 | 68 | 45–30 | 7.00 |
| 68 | 69 | 175–30 | 2.00 |
| 69 | 70 | 79–30 | 3.25 |
| 70 | 71 | 38 | 10.25 |
| 71 | 72 | 321–30 | 5.50 |
| 72 | 73 | 297 | 7.50 |
| 73 | 30 | 293–30 | 10.75 |
| 30 | 29 | 294–30 | 3.50 |
| 29 | 74 | 282 | 5.25 |
| 74 | 75 | 268–30 | 4.50 |
| 75 | 76 | 283–30 | 3.00 |
| 76 | 77 | 281 | 3.75 |
| 77 | 23 | 335–30 | 4.50 |
| 23 | 78 | 190–30 | 1.50 |
| 78 | 79 | 256 | 2.25 |
| 79 | 80 | 274–30 | 3.25 |
| 80 | 81 | 299–30 | 3.75 |
| 81 | 20 | 359–30 | 3.25 |

| ಕಲ್ಲಿನಿಂದ | ಕಲ್ಲಿಗೆ | ಕೋನ (ಡಿಗ್ರಿಗಳಲ್ಲಿ) | ಅಂತರ (ಸರಪಳಿಗಳಲ್ಲಿ) |
|---|---|---|---|
| 20 | 82 | 278–30 | 3.25 |
| 82 | 83 | 253 | 2.75 |
| 83 | 84 | 297 | 4.00 |
| 84 | 85 | 260 | 4.00 |
| 85 | 86 | 268–30 | 6.00 |
| 86 | 87 | 259.30 | 6.00 |
| 87 | 88 | 274 | 5.00 |
| 88 | 89 | 276–30 | 5.75 |
| 89 | 90 | 283–30 | 5.75 |
| 90 | 91 | 295 | 5.25 |
| 91 | 92 | 286–30 | 6.00 |
| 92 | 93 | 283 | 5.00 |
| 93 | 94 | 288–30 | 3.75 |
| 94 | 95 | 282 | 3.50 |
| 95 | 96 | 299–30 | 3.75 |
| 96 | 97 | 281 | 5.75 |
| 97 | 98 | 287–30 | 4.50 |
| 98 | 99 | 299 | 6.00 |
| 99 | 100 | 308–30 | 6.50 |
| 100 | 101 | 301 | 5.50 |
| 101 | 1 | 316–30 | 3.25 |

**ಹಕ್ಕು ಮತ್ತು ಸವಲತ್ತುಗಳು**

1) ಗ್ರಾಮ ವಾಸಿಗಳ ಜಾನುವಾರುಗಳಿಗೆ ಬರಗಾಲವಿದ್ದಾಗ ಅಂತಹ ಸಂದರ್ಭದಲ್ಲಿ ಉಚಿತ ಮೇವು ಒದಗಿಸುವುದು.

2) ರೈತರು ತಮ್ಮ ವಾಸ್ತವಿಕ ಉಪಯೋಗಕ್ಕಾಗಿ ಎಂ.ಎಫ್.ಪಿ., ಗುತ್ತಿಗೆದಾರರ ಕಡೆಯಿಂದ ಹಸಿರು ಗೊಬ್ಬರಕ್ಕಾಗಿ ಸೊಪ್ಪನ್ನು ಪಡೆಯುವುದು.

3) ಗ್ರಾಮಸ್ಥರು ವಾಸ್ತವಿಕ ಉಪಯೋಗಕ್ಕಾಗಿ ಅರಣ್ಯದಲ್ಲಿದ್ದ ಪ್ರತಾಪಿ ಕಟ್ಟಿಗೆ (ರಿಜರ್ವ್ ಮುಳ್ಳಿನ ಗಿಡಗಳು) ಉಚಿತವಾಗಿ ಪಡೆಯುವುದು.

4) ರೈತರು ತಮ್ಮ ವಾಸ್ತವಿಕ ಉಪಯೋಗಕ್ಕಾಗಿ ಹುಲ್ಲನ್ನು ದನಕರುಗಳಿಗೆ ಮಾತ್ರ ಮೇಯಲು ಉಚಿತವಾಗಿ ಅನುಮತಿ ನೀಡುವುದು.

5) ಮೀಸಲು ಅರಣ್ಯ ಕ್ಷೇತ್ರದ ಒಳಗೆ ದಾರಿ ಹಾದು ಹೋಗುವುದಿದ್ದು ಗ್ರಾಮಸ್ಥರಿಗೆ ಅನುಮತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಆರ್. ಅನಂತರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಪರಿಸ್ಥಿತಿ ಶಾಸ್ತ್ರ ಇಲಾಖೆ.

ಪಿ.ಆರ್. 1018

## LAW, JUSTICE AND HUMAN RIGHTS SECRETARIAT

**No. LAW 59 LAC 2011, Bangalore, Dated: 19-10-2011.**

### NOTIFICATION

In exercise of the powers conferred by Section 74(1) of the Food Safety and Standards Act 2006, the Government of Karnataka with the concurrence of the Hon'ble Chief Justice, High Court of Karnataka hereby constitutes Special Courts mentioned at Column (2) of the table below, in respect of the areas specified in the corresponding entries in Column (4) and appoints the District and Sessions Judges specified in Column (3) to be the Judges of the Special Courts, specified in the corresponding entries in column (2) thereof for the purpose of the said Section from the date of publication of this Notification in the Karnataka Gazette.

| Sl. No. | Name of the Court | Designation | Area |
|---|---|---|---|
| (1) | (2) | (3) | (4) |
| 01 | City Civil and Sessions Court, Bangalore | The Principal City Civil and Sessions Judge, Bangalore City | Bangalore Metropolitan Areas |
| 02 | District and Sessions Court, Bangalore Rural | The Principal District and Sessions Judge, Bangalore Rural, Bangalore | Bangalore Rural District |
| 03 | District and Sessions Court, Bagalkot | The District and Sessions Judge, Bagalkot | Bagalkot District |
| 04 | District and Sessions Court, Belgaum | The Principal District and Sessions Judge, Belgaum | Belgaum District |
| 05 | District and Sessions Court, Bellary | The Principal District and Sessions Judge, Bellary | Bellary District |
| 06 | District and Sessions Court, Bidar | The Principal District and Sessions Judge, Bidar | Bidar District |
| 07 | District and Sessions Court, Bijapur | The Principal District and Sessions Judge, Bijapur | Bijapur District |
| 08 | District and Sessions Court, Chamarajanagar | The District and Sessions Judge, Chamarajanagar | Chamarajanagar District |
| 09 | District and Sessions Court, Chikkaballapur | The District and Sessions Judge, Chikkaballapur | Chikkaballapur District |
| 10 | District and Sessions Court, Chikmagalur | The Principal District and Sessions Judge, Chikmagalur. | Chikmagalur District |
| 11 | District and Sessions Court, Chitradurga | The Principal District and Sessions Judge, Chitradurga | Chitradurga District |
| 12 | District and Sessions Court, Davanagere | The Principal District and Sessions Judge, Davanagere | Davanagere District |
| 13 | District and Sessions Court, Dharwad | The Principal District and Sessions Judge, Dharwad | Dharwad District |
| 14 | District and Sessions Court, Gadag | The District and Sessions Judge, Gadag | Gadag District |
| 15 | District and Sessions Court, Gulbarga | The Principal District and Sessions Judge, Gulbarga | Gulbarga District |
| 16 | District and Sessions Court, Hassan | The Principal District and Sessions Judge, Hassan | Hassan District |

| Sl. No. | Name of the Court | Designation | Area |
|---|---|---|---|
| (1) | (2) | (3) | (4) |
| 17 | District and Sessions Court, Haveri | The District and Sessions Judge, Haveri | Haveri District |
| 18 | District and Sessions Court, Mangalore | The Principal District and Sessions Judge, D.K. District, Mangalore | Mangalore, Dakshina Kannada District |
| 19 | District and Sessions Court, Karwar | The District and Sessions Judge,U.K. District, Karwar | Karwar, Uttara Kannada District |
| 20 | District and Sessions Court, Kodagu-Madikeri | The District and Sessions Judge,Kodagu District Madikeri | Kodagu District |
| 21 | District and Sessions Court, Kolar | The Principal District and Sessions Judge, Kolar | Kolar District |
| 22 | District and Sessions Court, Koppal | The District and Sessions Judge, Koppal | Koppal District |
| 23 | District and Sessions Court, Mandya | The Principal District and Sessions Judge, Mandya | Mandya District |
| 24 | District and Sessions Court, Mysore | The Principal District and Sessions Judge, Mysore | Mysore District |
| 25 | District and Sessions Court, Ramanagara | The District and Sessions Judge, Ramanagara | Ramanagara District |
| 26 | District and Sessions Court, Raichur | The Principal District and Sessions Judge, Raichur | Raichur District |
| 27 | District and Sessions Court, Shimoga | The Principal District and Sessions Judge, Shimoga | Shimoga District |
| 28 | District and Sessions Court, Tumkur | The Principal District and Sessions Judge, Tumkur | Tumkur District |
| 29 | District and Sessions Court, Udupi | The District and Sessions Judge,Udupi | Udupi District |
| 30 | District and Sessions Court,Yadgir | The District and Sessions Judge, Yadgir | Yadgir District |

By order and in the name of the Governor of Karnataka,

**N.RAMEGOWDA,**

Under Secretary To Government,

Law, Justice And Human Rights(Admn-1)

PR-971